# “ಕಾರ್ಲ್,ಉದ್ಯಾನದಿಂದ ಕೂಡಲೇ ಹೊರಬೀಳುSS!”

## ಕಾರುಹ್ಲಸ್ ಲಿನ್ನೈಯಸ್
## ಮತ್ತು ಎಲ್ಲ ಸಜೀವಗಳ ನಾಮಕರಣ




ಲೇಃ ಅನಿತಾ ಸ್ಯಾಂಚೇಝ್

ಚಿತ್ರಃ ಕ್ಯಾಥರಿನ್ ಸ್ಟೋಕ್

ಕನ್ನಡಕ್ಕೆ: ಪ್ರಭಾಕರ ನಾನಾವಟಿ



ಕಾರ್ಲ ಮತ್ತೇ ಉದ್ಯಾನದಲ್ಲಿ ಕಂಡನು. ಅದರ ಹೊರಗೆ ಇರಲು ಆತನಿಗೆ ಶಕ್ಯವಿರಲಿಲ್ಲ.
“ಕಾರ್ಲ, ಉದ್ಯಾನದಿಂದ ಕೂಡಲೇ ಹೊರಬೀಳು.” ಅವನ ತಾಯಿ ಇನ್ನೊಮ್ಮೆ ಕೂಗಿ ಅಭ್ಯಾಸ ಮಾಡಲು ಹೇಳಿದಳು. ತನ್ನ ಮಗ ಜಾಣನಾಗಿ ವಕೀಲ ಇಲ್ಲವೆ ಕೊನೆಗೆ ಸ್ವಿಡನ್ನಿನ ಸ್ವೆನಬ್ರೋಹಲ್ಟದ ಚರ್ಚಿನ ಮುಖ್ಯಸ್ಥನಾಗಬೇಕು ಎಂದು ಅವಳ ಕನಸು.

ಆದರೆ ಕಾರ್ಲನಿಗೆ ಅಭ್ಯಾಸವೆಂದರೆ ತಲೆ ಶೂಲೆ. ಆತನಿಗೆ ಯಾವಾಗಲು ಉದ್ಯಾನದಲ್ಲಿ ಹೋಗುವ ತವಕ

ಕಾರ್ಲ ಮಗುವಿದ್ದಾಗಿನಿಂದಲೇ ಗಿಡ-ಬಳ್ಳಿಗಳನ್ನು ಪ್ರೀತಿಸುತ್ತಿದ್ದನು. ಆತನು 1707ರ ಬೇಸಿಗೆ ಕಾಲದಲ್ಲಿ ಹುಟ್ಟಿದ. ಅವನ ಕೈಯಲ್ಲಿ ಹೂ ಕೊಟ್ಟರೆ ಆತನು ಅಳು ನಿಂತು ಬಿಡುತ್ತಿತ್ತು. ಪುಟ್ಟ ಕಾಲುಗಳನ್ನಿಡುವದು ಕಲಿತ ಮೇಲೆ ಅವನ ಓಟ ತನ್ನ ತಂದೆಯ ತೋಟಕ್ಕೇನೆ! ದೊಡ್ಡವನಾಗುತ್ತಿದ್ದಂತೆ ಪ್ರತಿಯೊಂದು ಗಿಡದ ಹೆಸರು ಹೇಳಲು ತಂದೆಗೆ ಒತ್ತಾಯ ಮಾಡುತ್ತಿದ್ದನು. ಉದ್ಯಾನದಲ್ಲಿಯ ಕ್ರಿಮಿ-ಕೀಟಕಗಳನ್ನು ನೋಡುತ್ತ ಕೂಡುವದರಲ್ಲಿ ಅವನಿಗೆ ವೇಳೆಯ ಪರಿವೆ ಇರುತ್ತಿರಲಿಲ್ಲ. ಬಣ್ಣಬಣ್ಣದ, ದೊಡ್ಡ ದೊಡ್ಡ ಕಣ್ಣುಗಳ, ಸರಿದಾಡುವ, ಹಾರಾಡುವ, ಎಷ್ಟೋ ಕಾಲುಗಳಿರುವ ಮುದ್ದಾದ ಕ್ರಿಮಿ-ಕೀಟಕಗಳನ್ನು ನೋಡುತ್ತ ಕೂಡುತ್ತಿದ್ದ. ಆದರೆ ಅವುಗಳ ಹೆಸರೇನು?

“ಕಾರ್ಲ,ಉದ್ಯಾನದಿಂದ ಕೂಡಲೇ ಹೊರಬೀಳುSS!”ತಾಯಿ ಮತ್ತೇ ಕೂಗಿದಳು. ಆದರೆ ಕಾರ್ಲ ಕಂಬಳಿ ಹುಳ ನೋಡುವದರಲ್ಲಿ ಮಗ್ನನಾಗಿದ್ದ.

ಶಾಲೆಯ ನಾಲ್ಕು ಗೋಡೆಗಳ ಬಂದಿವಾಸದಲ್ಲಿ ಕುಳಿತು ಗ್ರೀಕ್, ಲ್ಯಾಟಿನ್ ಕಲಿಯುವದಕ್ಕಿಂತ ಉದ್ಯಾನದಲ್ಲಿರುವದು ಅವನಿಗೆ ಬಹಳ ಸೇರುತ್ತಿತ್ತು. ಆದರೆ ಶಿಕ್ಷಕರು ಮತ್ತು ತಂದೆ-ತಾಯಿ ಈ ಮಗು ಚರ್ಚಿನ ಪಾದ್ರಿಯಾಗುವಷ್ಟು ಜಾಣನಲ್ಲ ಎಂದು ಚಿಂತಿಸುತ್ತಿದ್ದರು. ಕಾರ್ಲನ ತಂದೆ ನಿರಾಶೆಗೊಟ್ಟು ಅವನನ್ನು ಸಮಗಾರನ ಕೈಯಲ್ಲಿ ಕೆಲಸಕ್ಕೆಕೊಡಲು ಪ್ರಯತ್ನಿಸತೊಡಗಿದರು. ಆದರೆ ಗಿಡ-ಗಂಟಿಗಳನ್ನು ಪ್ರೀತಿಸುವ ಒಬ್ಬ ಶಿಕ್ಷಕ ಈತನು ಡಾಕ್ಟರ ವಿದ್ಯೆ ಕಲಿಯಲೆಂದು ಆಗ್ರಹ ಮಾಡಿದನು. ಆಗಿನ ಕಾಲದಲ್ಲಿ ಡಾಕ್ಟರನಾಗಬೇಕಾದರೆ ವನಸ್ಪತಿಶಾಸ್ತ್ರ ಕಲಿಯಬೇಕಾಗುತ್ತಿತ್ತು. ಹೀಗಾಗಿ ಕಾರ್ಲ ಇನ್ನಷ್ಟು ವೇಳೆ ತೋಟದಲ್ಲಿ ಕಳೆಯಬಹುದು. “ಚಪ್ಪಲಿ-ಬೂಟುಗಳನ್ನು ಹೊಲಿಯುವದಕ್ಕಿಂತ ಡಾಕ್ಟರನಾಗುವದು ನೂರು ಪಾಲು ಮೇಲು.” ಎಂದು ತಂದೆ-ತಾಯಿಗೆ ಹೇಳಿದನು. ಕೊನೆಗೆ ಅವರು ಒಪ್ಪಿದರು. “ಯಾವದರಲ್ಲಿ ಪ್ರೀತಿ ಇದೆಯೊ ಅದನ್ನು ಚೆನ್ನಾಗಿ ಮಾಡು.” ಎಂದು ತಂದೆ ಹೇಳಿದರು.



ಕಾರ್ಲ್‌ನ ಪಾಲಕರ ಹತ್ತಿರ ಅವನ ಶಿಕ್ಷಣದ ವೆಚ್ಚಕ್ಕಾಗಿ ಅಷ್ಟೊಂದು ಹಣವಿರಲಿಲ್ಲ. ಹೀಗಾಗಿ ಕಾರ್ಲ್ ಒಂದೆ ಹೊತ್ತು ಊಟ ಮಾಡಿ - ಅರೆಹೊಟ್ಟೆಯಿಂದ ಇದ್ದರೂ ಸಮಾಧಾನದಿಂದ ತನ್ನ ಶಿಕ್ಷಣವನ್ನು ಮುಂದುವರೆಸುತ್ತಿದ್ದ. ತನ್ನ ಅಭ್ಯಾಸದ ಕಾಲದಲ್ಲಿ ತಾನು ಅಭ್ಯಸಿಸಿದ ವನಸ್ಪತಿಗಳ ಸಹಾಯದಿಂದ ರೋಗಿಗಳ ಮೇಲೆ ಉಪಚಾರ ಕೂಡ ಮಾಡುತ್ತಿದ್ದ.
ಆದರೆ ಆ ಗಿಡ-ಗಂಟೆಗಳ ಹೆಸರೇ ಗೊತ್ತಿರದ್ದರಿಂದ ಎಷ್ಟೋ ಸಲ ಗೊಂದಲಕ್ಕೀಡಾ-ಗಬೇಕಾಗುತ್ತಿತ್ತು. ಯಾವ ವನಸ್ಪತಿ?



ಡಾಕ್ಟರರು, ತೋಟಗಾರರು, ಒಕ್ಕಲಿಗರು – ಈ ಎಲ್ಲರಿಗೂ-ಗಿಡಗಳ ಹೆಸರಿನ ಬಗ್ಗೆ ಒಮ್ಮತವಿರಲಿಲ್ಲ. ಒಬ್ಬರು ಡ್ಯಂಡಿಲಿಆನ ಎಂದರೆ ಮತ್ತೊಬ್ಬರು ಅದಕ್ಕೆ ಬ್ಲೋಬಾಲ, ಮಗದೊಬ್ಬರು ಸ್ವೈನ ಕ್ಲೌಟ ಎಂದು ತಮ್ಮ ಪ್ರದೇಶದ ಪರಿಚಿತ ಹೆಸರಿನಿಂದ ಕರೆಯುತ್ತಿದ್ದರು. ಕೆಲವಾರು ಸಲವಂತೂ ಒಂದೊಂದು ಗಿಡಕ್ಕೆ 40ಕ್ಕಿಂತ ಹೆಚ್ಚು ಹೆಸರುಗಳು ಇರುತ್ತಿದ್ದವು. ಡಾಕ್ಟರರು ಗ್ರೀಕ್ ಮತ್ತು ಲ್ಯಾಟಿನದಲ್ಲಿ ಉದ್ದುದ್ದ ಹೆಸರುಗಳನ್ನು ಉಪಯೋಗಿಸುತ್ತಿದ್ದದ್ದರಿಂದ ಮತ್ತಷ್ಟು ಗೊಂದಲ ಉಂಟಾಗುತ್ತಿತ್ತು. ಅವರಲ್ಲಿ ಕೂಡ ಒಮ್ಮತವಿರಲಿಲ್ಲ.
ಕಾರ್ಲ ನಾಯಿ ಕಡಿತಕ್ಕಾಗಿ ಕಂದು ಬಣ್ಣದ ಗುಲಾಬಿ ಹೂವನ್ನು ಉಪಯೋಗಿಸುತ್ತಿದ್ದ. ಆದರೆ ಅದು ಆ ಹೂವಿನ ಸರಿಯಾದ ಹೆಸರೇ? ಒಬ್ಬ ಡಾಕ್ಟರ ಅದಕ್ಕೆ **Rosa sylvestris inodora seu canina** ಇನ್ನೊಬ್ಬನು ಅದನ್ನು **Rosa sylvestris alba cum rubore, folio glabro** ಎಂದು ಕರೆಯುತ್ತಿದ್ದ.
ಬರೇ ಗೊಂದಲ “ಆದಿವಾಸಿಗಳಂತೆ ಮೂರ್ಖರು!” ಕಾರ್ಲ ಗೊಣಗುತ್ತಿದ್ದ.
“ಯಾವ ಜಾತಿಯ ಗಿಡವಿದೆ ಎಂಬುದೇ ತಿಳಿಯುವದಿಲ್ಲ”, ಕಾರ್ಲನ ದೂಡು..





ಜನರು ಪ್ರಾಣಿಗಳ ಹೆಸರು ಮತ್ತು ವರ್ಗಗಳ ಬಗ್ಗೆ ಕೂಡ ಬಹಳ ಗೊಂದಲದಲ್ಲಿದ್ದರು. ಕಣ್ಕಪ್ಪಡಿ ಪಕ್ಷಿಯೋ ಇಲ್ಲವೆ ಸಸ್ತನಿ ಪ್ರಾಣಿಯೋ, ಇಲ್ಲವೆ ಮತ್ತೇನಾದರು? ತಿಮಿಂಗಲ ಇದು ಮೀನುಗಳ ಜಾತಿಯದೊ ಇಲ್ಲವೆ ಸಸ್ತನಿ ಪ್ರಾಣಿಯೋ? ವಿಜ್ಞಾನಿಗಳಲ್ಲಿ ಇವು ಬಿಸಿ ಬಿಸಿ ಚರ್ಚೆಯ ವಿಷಯಗಳಾಗಿದ್ದವು. ಕಾರ್ಲನು ಇವುಗಳ ನಾಮಕರಣ ಮಾಡಬೇಕೆಂದು ನಿಶ್ಚಯಿಸಿದನು. ಆದರೆ ಲಕ್ಷಾನುಗಟ್ಟಲೆ ಇರುವ ಸಜೀವಗಳಿಗೆಲ್ಲ ನಿರ್ದಿಷ್ಟ ಹೆಸರು ಇಡುವದು ಸುಲಭವಾದ ಕೆಲಸವಲ್ಲ. ಆನೆ, ಕುದುರೆ, ಹಣ್ಣು-ಹಂಪಲ, ಚಿಟ್ಟೆಗಳು, ಹಾವುಗಳು, ಹೂವುಗಳು ಎಷ್ಟೊಂದು ವಿವಿಧ ಜಾತಿಗಳು? ಇವುಗಳಿಗೆ ಹೆಸರು ಇಡಲು ಸಾಧ್ಯವೇ?

ಕಾರ್ಲನು ತನ್ನ ಶಿಕ್ಷಣ ಮುಗಿಸಿ ಈಗಷ್ಟೇ ಕಾಲೇಜಿನಿಂದ ಹೊರಬಿದ್ದಿದ್ದನು. ಆದರೆ ಆತನಿಗೆ ಈ ಸಮಸ್ಯೆಯನ್ನು ಎದುರಿಸುವ ಧೈರ್ಯವಿತ್ತು.
ಮೊಟ್ಟ ಮೊದಲು ಸಜೀವಗಳಲ್ಲಿ ಪ್ರಾಣಿಜಗತ್ತು ಮತ್ತು ವನಸ್ಪತಿಜಗತ್ತು ಎಂದು ಎರಡು ಬೃಹತ ವಿಭಾಗದಲ್ಲಿ ಬೇರ್ಪಡಿಸಿ  ಈ ಜಗತ್ತನ್ನು ಎರಡು ಸಮೂಹಗಳಲ್ಲಿ ವಿಭಾಗಿಸಿದನು. ವನಸ್ಪತಿಗಳ ಹೂಗಳ ರಚನೆಯನ್ನು ಆಧರಿಸಿ ಅವುಗಳಲ್ಲಿ 24 ಸಮೂಹಗಳಲ್ಲಿ ಗುರುತಿಸಿದನು. ಅವುಗಳಿಗೆ ಲ್ಯಾಟಿನದಲ್ಲಿಯ ಹೆಸರು ಕೊಟ್ಟನು. ಹೆಸರು ಕೂಡ ಎರಡು ಭಾಗಗಳಲ್ಲಿ ಇದ್ದು ನೆನಪಿನಲ್ಲಿಡಲು ಸುಲಭವಾಗಿತ್ತು. ನಾಯಿ ಕಡಿತದ ಉಪಚಾರಕ್ಕಾಗಿ ಉಪಯೋಗಿಸುವ ಗುಲಾಬಿ ಹೂ ಇನ್ನು ಮೇಲೆ **Rosa Canina** ಆಯಿತು.

Rosa canina




“ಈ ಜಗತ್ತು ಇರುವವರೆಗೆ ವಸಂತ ಕಾಲದಲ್ಲಿ ಹೂಗಳು
ಅರಳುವವು ಮತ್ತು ಅವುಗಳ ಹೆಸರು ಕೂಡ
ಕೊನೆಯವರೆಗೆ ಉಳಿಯುವವು.”



ಒಂದಾದ ಮೇಲೆ ಒಂದರಂತೆ ಆತ ವನಸ್ಪತಿಗಳಿಗೆ ಹೆಸರಿಡತೊಡಗಿದನು. ಅವನ ಕಡೆಗೆ ಹೆಸರುಗಳ ಕೊರತೆ ಇರಲಿಲ್ಲ. ಹೂವಿನ ವಾಸನೆ ಅವುಗಳ ಆಕಾರ, ಅವುಗಳಲ್ಲಿಯ ಒರಟುತನ ಇಲ್ಲವೆ ನಯ ಮುಂತಾದ ವೈಶಿಷ್ಟ್ಯಗಳನ್ನು ಆಧರಿಸಿ ಆತ ಹೆಸರು ನಿರ್ದಿಷ್ಟಗೊಳಿಸುತ್ತಿದ್ದ. ಕೆಲ ಸಲ ತನ್ನ ಹತ್ತಿರದ ವ್ಯಕ್ತಿಗಳ ಹೆಸರಿನ ಮೇಲಿಂದಲು ವನಸ್ಪತಿಗಳ ಹೆಸರು ಇಟ್ಟಿದ್ದನು. ಉದಾಹರಣಾರ್ಥ ತನ್ನ ಮೆಚ್ಚಿನ ಶಿಕ್ಷಕರಾದ ಓಲೋಫ ರುಡ್ಬೆಕ ಇವರ ಹೆಸರನ್ನು ಆಧರಿಸಿ ಬಂಗಾರ ಬಣ್ಣದ ಹೂವಿಗೆ **Rudbeckia hirta** ಎಂದು ಹೆಸರಿಟ್ಟನು.

ಕಾರ್ಲನು ತನ್ನ ಉದ್ಯಾನದಲ್ಲಿಯ ಎಲ್ಲ ವನಸ್ಪತಿಗಳಿಗೆ ಹೊಸ ಹೆಸರನ್ನು ಕೊಟ್ಟನು. ಸಮೀಪದ ಅಡವಿಯಲ್ಲಿಯ ಗಿಡ-ಮರಗಳಿಗೆ ಹೆಸರು ಕೊಟ್ಟನು. ಸಾವಿರಾರು ಮೈಲು ದೂರದಲ್ಲಿರುವ ಸ್ವಿಡನ್ನಿನ ಉತ್ತರ ಭಾಗದಲ್ಲಿದ್ದ ಲ್ಯಾಪಲ್ಯಾಂಡಿಗೆ ಇನ್ನಷ್ಟು ಗಿಡ-ಮರಗಳ ಶೋಧಕ್ಕಾಗಿ ಹೋದನು



“ಲ್ಯಾಪಲ್ಯಾಂಡ ಇದು ಒಂದು ನಿರ್ಜನ, ಕಾಲುದಾರಿ ಕೂಡ ಇಲ್ಲದ ಅತೀ ಶೀತದ ಹಿಮಮಯ ಪ್ರದೇಶ. ಮೊಳಕೈವರೆಗಿನ ಹಿಮದ ನೀರಿನಲ್ಲಿಂದ ಅವನು ಅಲ್ಲಿಗೆ ಹೋದಾಗ ಚಿಗಟೆ-ಸೊಳ್ಳೆಗಳ ಗುಂಪು ಅವನನ್ನು ಮುತ್ತುತ್ತಿತ್ತು. ಬಾಯಿ, ಮೂಗಿನ ಹೊರಳೆಗಳಲ್ಲಿ, ಕಣ್ಣುಗಳಲ್ಲಿ ಹೊಕ್ಕು ಕಣ್ಣೀರು ತರಿಸುತ್ತಿದ್ದವು. ತಿನ್ನಲಿಕ್ಕೆ ಮೀನುಗಳು ಕೂಡ ದೊರೆಯುತ್ತಿರಲಿಲ್ಲ. ಬರಿ ರೇನಡಿಅರದ ಹಾಲಿನ ಮೇಲೆ .ದಿವಸ ಕಳೆಯಬೇಕು.” ಎಂದು ಆತ ಬರೆದಿಟ್ಟಿದ್ದಾನೆ..

ಕಾರ್ಲನು ಇಂತಹ ಚಳಿಯಲ್ಲಿ ಕೂಡ ಸಸ್ಯಗಳ ಸಂಗ್ರಹ ಮಾಡಿದನು. ಹಾವಸೆ ಬೆಳೆದಿದ್ದನ್ನು ಲೆಕ್ಕಿಸದೆ ಮೊಳಕಾಲೂರಿ ಕೈಗಳ ಮೇಲೆ, ಅಂಬೆಗಾಲಿಡುತ್ತ ಚಿಕ್ಕ ಪುಟ್ಟ ಪಾಚಿಗಳನ್ನು ಗುರುತಿಸಿದನು. ಎತ್ತರದ ಗಿಡಗಳನ್ನು ಹತ್ತಿ ಅಲ್ಲಿ ಬೆಳೆದ **pinecone**ಗಳನ್ನು ಕೂಡಿ ಹಾಕಿದನು. ವಿಜ್ಞಾನಿಗಳಿಗೂ ಕೂಡ ಗೊತ್ತಿರದ ಎಷ್ಟೋ ವನಸ್ಪತಿಗಳನ್ನು ಆತ ಕಂಡು ಹಿಡಿದನು.

ಕಾರ್ಲನಿಗೆ ಎರಡು ಮೊಗ್ಗೆಗಳಿರುವ ಒಂದು ಕಂದು ಬಣ್ಣದ ಹೊಳೆಯುತ್ತಿರುವ ಹೂ ಬಹಳ ಹಿಡಿಸಿತು. ಅದರ ವಾಸನೆ ಸಿಹಿತಿಂಡಿಯಂತೆ. ಇತ್ತು. ಈ ಕಾಡು ಗಿಡಕ್ಕೆ ತನ್ನದೇ ಹೆಸರಿಟ್ಟನುಃ **Linnaea borealis** ಇಲ್ಲವೆ **Linne of the North.**

ಕಾರ್ಲನಿಗೆ ಪ್ರಾಣಿಜಗತ್ತಿನ ಅಂಜಿಕೆ ಇರಲಿಲ್ಲ. ಒಂಟೆ, ಮಳೆಹುಳ, ಕಪ್ಪೆ, ಉಷ್ಟ್ರ ಪಕ್ಷಿ, ಅಂಬಲಿ ಮೀನು –ಈ ಎಲ್ಲ ಜೀವಿಗಳು –ಮುಗಿಲಲ್ಲಿ ಹಾರಾಡುವ, ನೀರಿನಲ್ಲಿ ಈಜುವ, ನೆಲದ ಮೇಲೆ ಓಡುವ ಇಲ್ಲವೆ ಸರಿದಾಡುವ ಪ್ರಾಣಿಗಳಿಗೆಲ್ಲ - ಹೆಸರು ಇಡಬೇಕೆನ್ನಿಸುತ್ತಿತ್ತು. ಆದರೆ ಅವುಗಳ ಗಾತ್ರ, ತೂಕ ಗಳಲ್ಲಿ ಇಷ್ಟೊಂದು ವಿವಿಧತೆ ಇರುವದರಿಂದ ಹೆಸರು ಹೇಗೆ ಇಡಬೇಕು ಎಂಬುದು ದೊಡ್ಡ ಸಮಸ್ಯೆ ಎನ್ನಿಸಿತು.

*“ಜಾಣತನದ ಮೊದಲನೆ ಹೆಜ್ಜೆ ಎಂದರೆ ಅವುಗಳನ್ನು ಸರಿಯಾಗಿ ತಿಳಿದುಕೊಳ್ಳುವದು.”*



“ನಿರೀಕ್ಷಣೆಯಿಂದಲೇ ಸತ್ಯವನ್ನು ಸರಿಯಾಗಿ ಕಂಡು ಹಿಡಿಯಬಹುದು.”.ಕಾರ್ಲನು ಹೇಳಿದನು.ಆತ ಪ್ರಾಣಿಸಂಗ್ರಹಾಲಯದ ಒಳಗೆ ಹೋಗಿ ಅಲ್ಲಿಟ್ಟ ಪ್ರಾಣಿಗಳ ತಂಡವನ್ನು ನೀರಿಕ್ಷಿಸಿದನು. ಕಣ್ಕಪ್ಪಡಿಯ ಬಾಯಿ ತೆರೆದು ನೋಡಿದಾಗ ಅಲ್ಲಿ ಹಲ್ಲುಗಳಿದ್ದವು, ಆದರೆ ಪಕ್ಷಿಗಳಿಗೆ ಇರುವ ಹಾಗೆ ಕೊಕ್ಕು ಇರಲಿಲ್ಲ. ಅದರ ಮೈಮೇಲೆ ಕೈಯಾಡಿಸಿದಾಗ ರೆಕ್ಕೆಗಳಿರದೆ ತುಪ್ಪಳವಿತ್ತು. ಉಳಿದ ವಿಜ್ಞಾನಿಗಳು ಅದನ್ನು ಪಕ್ಷಿ ಎಂದು ಗಣನೆ ಮಾಡುತ್ತಿದ್ದರು, ಆದರೆ ಕಾರ್ಲ ಅದಕ್ಕೆ ಒಪ್ಪಲಿಲ್ಲ.
ತಿಮಿಂಗಿಲನ್ನು ಮೀನುಗಳ ಜಾತಿಗೆ ಸೇರಿಸುವ ವಿಜ್ಞಾನಿಗಳ ಹೇಳಿಕೆಗೆ ಕಾರ್ಲ ಒಪ್ಪಲಿಲ್ಲ. ಅದು ಸಸ್ತನಿ ಪ್ರಾಣಿ ಇದ್ದು ಇತರ ಸಸ್ತನಿ ಪ್ರಾಣಿಗಳಂತೆ ಮರಿಹಾಕುತ್ತದೆ ಅಲ್ಲದೆ ಅದು ಮೀನುಗಳಂತೆ ಕಿವಿರಿನಿಂದ ಉಸಿರಾಡಿಸದೆ ಶ್ವಾಸಕೋಶಗಳ ಮುಖಾಂತರ ಉಸಿರಾಡಿಸುತ್ತದೆ. ಹಾಗಿದ್ದರೆ ಅವುಗಳನ್ನು ಇಲಿಯ ಜಾತಿಗೆ ಸೇರಿಸಬಹುದೇ? ಇದೆಲ್ಲ ವಿಚಿತ್ರವೆನ್ನಿಸಬಹುದು. ಆದರೆ ಕಾರ್ಲನಿಗೆ ಅವುಗಳ ಅಂತರ್ಭಾಗದ ಪರಿಚಯ ಚೆನ್ನಾಗಿ ಇತ್ತು.



ಕಾರ್ಲನು ಪ್ರಾಣಿಜಗತ್ತನ್ನು ಈ ರೀತಿಯಾಗಿ ವರ್ಗೀಕರಣ ಮಾಡಿದನು:
**Class Quadrupedia (ಸಸ್ತನಿ)**
**Class Aves (ಪಕ್ಷಿ)**
**Class Pisces (ಮೀನು)**
**Class Amphibia (ಸ್ಥಲ-ಜಲೋಭಯಜೀವಿ ಮತ್ತು ದ್ವಿಚರ ಪ್ರಾಣಿಗಳು)**
**Class Insecta (ಕ್ರಿಮಿ-ಕೀಟಕಗಳು)**
**Class Vermes (ಹುಳಗಳು ಮತ್ತು ಬೆನ್ನೆಲುಬು ಇಲ್ಲದ ಪ್ರಾಣಿಗಳು)**
ಇದಾದ ಮೇಲೆ ಆತ **Class Paradoxa** ಎಂಬ ಇನ್ನೊಂದು ಗುಂಪನ್ನು ನಿರ್ಮಿಸಿದನು. ಇದರಲ್ಲಿ ಇನ್ನೂವರೆಗೂ ಕಣ್ಣಿಗೆ ಕಾಣದ ಯುನಿಕಾರ್ನ ಮತ್ತು ಡ್ರಾಗನದಂತಹ ದಂತಕತೆಯಲ್ಲಿಯ ಪ್ರಾಣಿಗಳಿಗೆ ಅವಕಾಶ ಕಲ್ಪಿಸಿಕೊಟ್ಟನು. ವನಸ್ಪತಿಗಳಿಗೆ ಹೆಸರಿಸಿದಂತೆ ಇಲ್ಲಿಯೂ ಪ್ರತಿಯೊಂದು ಪ್ರಾಣಿಯನ್ನು ಎರಡು ಶಬ್ದಗಳಿಂದ ಗುರುತಿಸಿದನು. ಜೇನ್ನೊಣದ ಹೆಸರು **Apis** (ಜೇನ್ನೊಣ) **mellifera** (ಜೇನು ಕೊಡುವ) ಎಂದಾಯಿತು. ಅವನ ಪ್ರೀತಿಯ ನಾಯಿಗೆ **Canis** (ನಾಯಿ) **familiaris** (ಪರಿಚಿತ) ಎಂದು ಹೆಸರಿಡಲಾಯಿತು. ಮನುಷ್ಯರೆಲ್ಲ ಪ್ರಾಣಿಗಳು ಎಂಬ ಸಂಗತಿ ಅವನಿಗೆ ತಿಳಿದಿತ್ತು. ಆದ್ದರಿಂದ ಮನುಷ್ಯರನ್ನು **Homo** (ಮಾನವ) **sapiens** (ಜಾಣರು) ಎಂದು ಹೆಸರಿಸಿದನು.



ಕಾರ್ಲನ ಕೆಲಸ ಮುಗಿಯಿತೇ? ಇನ್ನೂ ಮುಗಿದಿರಲಿಲ್ಲ. ಚಿಕ್ಕಂದಿನಿಂದಲು ಅವನಿಗೆ ಕ್ರಿಮಿಗಳ ಬಗ್ಗೆ ಸಾಕಷ್ಟು ಕುತೂಹಲ. ಆದರೆ ಆತನಿಗೆ **Class Insecta**ವನ್ನು ರಚಿಸುವದು ಬೃಹತ ಕೆಲಸವೆನ್ನಿಸಿತು. ಇದರಲ್ಲಿ ಇರುವೆ, ಹಾತೆ, ಚಿಟ್ಟೆ, ಎಲೆ ಹೇನು, ಕಣಜಲು ನೊಣ ಮತ್ತು ದುಂಬಿ ಇದ್ದವು. ದುಂಬಿ!... ಇದೆಲ್ಲ ಶಕ್ಯವೇ?

ಕಾರ್ಲನು ಸಾವಿರಾರು ಜಾತಿಯ ಕ್ರಿಮಿಗಳ ಅಭ್ಯಾಸ ಮಾಡಿದನು. ಅವೆಲ್ಲ ಒಂದೇ ರೀತಿಯಾಗಿ ಏಕೆ ಇವೆ? ಮತ್ತು ಅವುಗಳಲ್ಲಿ ಯಾವ ವ್ಯತ್ಯಾಸವಿದೆ? ಆತನು ಈ ಕ್ರಿಮಿಗಳನ್ನು ಬೇರೆ ಬೇರೆ ಗುಂಪು (ವ್ಯವಸ್ಥೆ)ಗಳಲ್ಲಿ ವರ್ಗೀಕರಿಸಿದನು

**Lepidoptera: butterflies and moths** ಚಿಟ್ಟೆ ಮತ್ತು ಹಾತೆ

**Coleoptera: : beetles.** ದುಂಬೆಯಂತೆ ದಪ್ಪ ತ್ವಚೆ ಇರುವ ಕ್ರಿಮಿಗಳು

ಆತನು ಇರುವೆ, ಜೇನ್ನೊಣ ಮತ್ತು ಹಾತೆಗಳ ತೆಳ್ಳಗಿನ ಟೊಂಕ ಮತ್ತು ವೇದನೆ ಕೊಡುವ ಕೊಂಡಿ ಕಂಡು ಇರೆ ಗುಂಪಿಗೆ **Hymenoptera** ಎಂದು ಕರೆದನು.

ಪ್ರತಿಯೊಂದು ವ್ಯವಸ್ಥೆಯಲ್ಲಿ ಬೇರೆ ಬೇರೆ ಕುಟುಂಬಗಳಾಗಿ ಮತ್ತು ಪ್ರತಿ ಕುಟುಂಬದಲ್ಲಿ ಬೇರೆ ಬೇರೆ ಗುಂಪುಗಳಾಗಿ ಬೇರ್ಪಡಿಸಿದನು. ಈ ಪ್ರತಿ ಗುಂಪಿಗೆ **genus** ಎಂದು ಕರೆದನು. ಮತ್ತು ಪ್ರತಿ **genus** ದಲ್ಲಿ ಬೇರೆ ಬೇರೆ ವಂಶ **(species)** ಗಳಿದ್ದವು.

Order Lepidoptera

Family Papilionidae

Genus Papilio

Species Papilio polyxenes, or Black Swallowtail



Order Lepidoptera

Family Papilionidae

Class Insecta

Order Coleoptera

Order Hymenoptera

Species Papilio glaucus, or Tiger Swallowtail

Species Papilio alexanor, or Southern Swallowtail





ಕಾರ್ಲ ತನ್ನ ವಿಚಾರಗಳನ್ನು ಪುಸ್ತಕ ಬರೆದು ಪ್ರಕಾಶಿತಗೊಳಿಸಿದನು.ಆದರೆ ಪುಸ್ತಕ ಓದಿದ ವಿಜ್ಞಾನಿಳೆಲ್ಲ ಅವನ ಮೇಲೆ ಸಿಟ್ಟಿಗೆದ್ದರು. ಆಗಿನ ಕಾಲದ **hypopbyhtcarpodcnJorunt** ದಂತಹ ಕ್ಲಿಷ್ಟ ಹೆಸರುಗಳನ್ನು ಉಪಯೋಗಿಸಿದ ಪ್ರಸಿದ್ಧ ಪ್ರಾಣಿ ಶಾಸ್ತ್ರಜ್ಞರು ಮತ್ತು ವನಸ್ಪತಿ ಶಾಸ್ತ್ರಜ್ಞರು ಕೂಡ ಈ ತರುಣ ಅಭ್ಯಾಸಕನ ಮೇಲೆ ರೊಚ್ಚಿಗೆದ್ದರು. ಕಾರ್ಲನು ಬಹು ದೊಡ್ಡ ಪ್ರಮಾದವನ್ನು ಮಾಡಿದ್ದಾನೆ ಎಂಬುದರ ಬಗ್ಗೆ ಅವರೆಲ್ಲರಲ್ಲಿ ಒಮ್ಮತವಿತ್ತು. ಮನುಷ್ಯರು ಕೂಡ ಪ್ರಾಣಿಗಳಂತೆ  ಇಷ್ಟೇ ಅಲ್ಲ, ಅವರು ಬೆಕ್ಕು, ಮಂಗ, ಗೋರಿಲ್ಲಾ, ಚಿಂಪಾಂಝಿಯಂತೆ ಸಸ್ತನಿ ಪ್ರಾಣಿಗಳಂತೆ! ಎಂತಹ ಅಪರಾಧ? ಜೋಹಾನ್ ಸೀಜೆಸಬೆಕ್ ಎಂಬ ವನಸ್ಪತಿ ಶಾಸ್ತ್ರಜ್ಞನಂತೂ ಈ ಪುಸ್ತಕದಲ್ಲಿಯ ವಿಚಾರಗಳೆಲ್ಲ  ಹೇಸಿಕೆಯನ್ನುಂಟು ಮಾಡುತ್ತವೆ ಎಂದು ಹೀಯಾಳಿಸಿದನು. ಪೋಪನು ಈ ಪುಸ್ತಕದ ಮೇಲೆ ಬಹಿಷ್ಕಾರ ಹಾಕಿದನು. ಅವುಗಳನ್ನು ಸುಟ್ಟು ಹಾಕಬೇಕು ಎಂದು ಆದೇಶಿಸಿದನು.

ಕಾರ್ಲನಿಗೂ ಕೂಡ ಸಿಟ್ಟು ಬಂತು. ಸೀಜೆಸಬೆಕ್ ನನ್ನು ಮೂರ್ಖ, ದಡ್ಡನೆಂದು ಬೈದನು. ಪತ್ರಗಳ ಮುಖಾಂತರ ಅವರ ಜಗಳ ಮುಂದೊರೆಯಿತು. ಕಾರ್ಲನು ಕೊನೆಗೆ ಅವನನ್ನು ಹೊಲಸು ನಾರುವ . **Siegesbeckia orientalis** ಎಂಬ ಹುಲ್ಲಿಗೆ ಹೋಲಿಸಿದನು.



“ಈತ ತನ್ನನ್ನು ಮೊಟ್ಟ ಮೊದಲನೆ ಪುರುಷ
ಆದಮನೆಂದು ತಿಳಿದುಕೊಂಡು ಎಲ್ಲ
ಪ್ರಾಣಿಗಳಿಗೆ ಪೂರ್ವಜರನ್ನು ಲೆಕ್ಕಿಸದೆ
ಹೆಸರಿಡುತ್ತಾನೆ “

– ಅಬ್ರೈಕ್ಟ ಫಾನ್ ಹಾಲ್ಲರ

ಕೊನೆಯಲ್ಲಿ ಕಾರ್ಲನಿಗೆ ಈ ಚರ್ಚೆಯಲ್ಲಿ ಏನು ಹುರುಳಿಲ್ಲ ಎಂಬುದು ಗೊತ್ತಾಯಿತು. "ಜಗಳದಲ್ಲಿ ವೇಳೆ ಹಾಳು ಮಾಡುವದಕ್ಕಿಂತ ನನ್ನ ವೇಳೆಯನ್ನು ಸರಿಯಾಗಿ ಉಪಯೋಗಿಸಬಹುದು." ಎಂದೆನ್ನುತ್ತ ತನ್ನ ನಾಮಕರಣದ ಕೆಲಸ ಮುಂದುವರೆಸಿದನು.

ಕಾರ್ಲನು ಶಿಕ್ಷಕನಾದನು. ಕ್ಲಾಸರೂಮಿನಲ್ಲಿ ಆತನಿಗೆ ಬೇಜಾರು ಬರುತ್ತಿತ್ತು. ಸಾವಿರಾರು ಗಿಡ-ಗಂಟಿ-ಬಳ್ಳಿಗಳಿದ್ದ ಉದ್ಯಾನವೇ ಅವನ ಪಾಠ್ಯಪುಸ್ತಕವಾಗಿತ್ತು. ನೂರಾರು ವಿದ್ಯಾರ್ಥಿಗಳ ಜತೆ ಆತ ಕಗ್ಗಾಡಿನಲ್ಲಿ, ಎದೆ ಎತ್ತರದ ಹುಲ್ಲುಗಾಡಿನಲ್ಲಿ ಸುತ್ತಾಡುತ್ತಿದ್ದನು. ಮುಂಜಾನೆಯಿಂದ ರಾತ್ರಿಯವರೆಗಿನ ಈ ಸಾಹಸಪಯಣಗಳಲ್ಲಿ ಮಕ್ಕಳು ಸಂಗೀತ ಸಾಧನಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಯಾರಿಗಾದರು ಹೊಸ ವನಸ್ಪತಿ ಕಂಡರೆ ಕಾರ್ಲನು ಮೊಣಕಾಲೂರಿ ಅದರ ನೀರಿಕ್ಷಣೆ ಮಾಡುತ್ತಿದ್ದನು. ಬಿಗುಲು ಬಾರಿಸಿ ತನ್ನ ಆನಂದವನ್ನು ವ್ಯಕ್ತಪಡಿಸುತ್ತಿದ್ದನು.

**"ತೀರ ಸಾಮಾನ್ಯ ವಸ್ತುಗಳು ಕೂಡ ಆಶ್ಚರ್ಯಜನಕವಾಗಿರುತ್ತವೆ. "**





ಕಾರ್ಲನ ವಿದ್ಯಾರ್ಥಿಗಳು ದೊಡ್ಡವರಾದ ಮೇಲೆ ಅರೇಬಿಯಾ, ಆಸ್ಟ್ರೇಲಿಯಾ, ಆಫ್ರಿಕಾ, ಜಪಾನದಂತಹ ಜಗತ್ತಿನ ಮೂಲೆಮೂಲೆಗಳಿಗೆ ಹೋಗಿ ಕಾರ್ಲನ ಶೋಧನೆಗಳನ್ನು ಕಲಿಸತೊಡಗಿದರು.
ಅವರು ತಾವು ಕಂಡ ಹೊಸ ಹೊಸ ಪ್ರಾಣಿ ಮತ್ತು ಸಸ್ಯಗಳ ಬಗ್ಗೆ ತಮ್ಮ ಪ್ರೀತಿಯ ಗುರುಗಳಿಗೆ ತಿಳಿಸತೊಡಗಿದರು. ಕಾರ್ಲನಿಗೆ ತಾನು ಇಲ್ಲಿಯವರೆಗೆ ಮಾಡಿದ ಕೆಲಸ ಅತ್ಯಲ್ಪವೆಂಬುದು ತಿಳಿದು ಬಂತು. ಆತನ ವಿದ್ಯಾರ್ಥಿಗಳು ಹಿಮಮಯ ಬೆಟ್ಟದ ತುದಿಯ ಮೇಲಿರುವ, ಬರಡಾದ ಭೂಮಿಯಲ್ಲಿರುವ ಮಾದರಿಗಳನ್ನು ಕಾರ್ಲನಿಗೆ ಕಳಿಸಿಕೊಡುತ್ತಿದ್ದರು. ಅವನ ಟೇಬಲ್ಲಿನ ಮೇಲೆ,ಕಪಾಟುಗಳಲ್ಲಿ ಇಂತಹ ಸಾವಿರಾರು ಮಾದರಿಗಳು ಇದ್ದವು. ಕ್ಯಾನಡಾದ ಮಲ್ಬರಿ ಹಣ್ಣು, ಚೀನದ ರೇಶಿಮೆ ಹುಳಗಳ ಮಾದರಿ, ದಕ್ಷಿಣ ಅಮೇರಿಕೆಯಲ್ಲಿ ಗಿಳಿ, ಉತ್ತರ ಅಮೇರಿಕೆಯಲ್ಲಿಯ ರಕೂನ್ ... ಹೀಗೆ ಎಷ್ಟೋ ಸಜೀವಗಳು...
ಈ ಎಲ್ಲವುಗಳಿಗೆ ಆತನಿಗೆ ಹೆಸರಿಸಲು ಸಾಧ್ಯವೇ?

ಅಹುದು. ಅಸಾಧ್ಯವಲ್ಲ ಕಾರ್ಲನು ಸುಮಾರು 12ಸಾವಿರ ಪ್ರಾಣಿ ಮತ್ತು ವನಸ್ಪತಿ ಜಾತಿಗಳ ಹೆಸರು ಇಟ್ಟನು. ಭಾಷೆ ಯಾವದೇ ಇರಲಿ- ರಶಿಯನ್,ಫ್ರೆಂಚ, ಸ್ವಿಡಿಶ್, ಮ್ಯಾಂಡರಿನ್, ಜಪಾನೀಜ- ಪ್ರಾಣಿ ಮತ್ತು ವನಸ್ಪತಿಗಳ ಹೆಸರು ನಿರ್ದಿಷ್ಟವಾಗಿದ್ದರಿಂದ ಸಂವಾದಿಸಲು ಸುಲಭವಾಯಿತು.

ಕಾರ್ಲನು ಇದನ್ನು ಮಾಡಿ ತೋರಿಸಿದನು. ವಿಜ್ಞಾನಕ್ಕೆ ಒಂದು ಹೊಸ ಭಾಷೆಯ ಕಾಣಿಕೆ ಕೊಟ್ಟು ಜಗತ್ತನ್ನೇ ನೋಡುವ ದೃಷ್ಟಿಯನ್ನು ಬದಲಿಸಿ ಬಿಟ್ಟನು




Daucus carota
Daucus carota
Daucus carota
Daucus carota

ಡಾಕ್ಟರರು, ಒಕ್ಕಲಿಗರು, ತೋಟಗಾರರು ಕಾರ್ಲನು ತಯಾರಿಸಿದ ಸ್ಪಷ್ಟವಾದ ಮತ್ತು ಸುಲಭವಾದ ರೀತಿಯನ್ನು ಅವಲಂಬಿಸತೊಡಗಿದರು. ಅಲ್ಲಿಯ ರಾಜರು ಪಾರಿತೋಷಕಗಳನ್ನು ಕೊಟ್ಟರು. ರಾಣಿವಾಸದಲ್ಲಿದ್ದವರು ಇವನ ಪುಸ್ತಕಗಳನ್ನು ಹೊಂಡಾಡಿದರು.
1757ರಲ್ಲಿ ಸ್ವಿಡನ್ನಿನ ರಾಜನು ಇವನಿಗೆ ಸರದಾರ ಪದವಿಯನ್ನು ಕೊಟ್ಟನು. ಅಡಾಲ್ಫ ಫ್ರೆಡ್ರಿಕ್ ಎಂಬ ರಾಜನು **Knight of the Order of the Polar** ಎಂಬ ಬಹುಮಾನ ಕೊಟ್ಟು ಆದರಿಸಿದನು. ಇಂತಹ ಪದವಿಯನ್ನು ಗಳಿಸಿದ ಕಾರ್ಲ ಜಗತ್ತಿನಲ್ಲಿಯ ಮೊದಲನೆ ವಿಜ್ಞಾನಿ. ಕಾರ್ಲ ಸ್ವತಃ ಕೂಡ ತನ್ನ ಕಾರ್ಲ ಲಿನ್ವೆ ಎಂಬ ಹೆಸರನ್ನು ಗ್ರೀಕ್ – ಲ್ಯಾಟಿನ್ ದಲ್ಲಿ ಬದಲಿಸಿ **Carolus Linnaeus** ಆದನು.
ತನ್ನ ನೂತನ ಪದವನ್ನು ಘೋಶಿಸುವಂತಹ ವಿಶಿಷ್ಟ ಉಡುಗೆಯನ್ನು ರಚಿಸಿದನು. ಇನ್ನುಳಿದ ಸರದಾರರಂತೆ ಸಿಂಹ –ಹುಲಿ ಯಂತಹ ಶೌರ್ಯದ ಪ್ರತೀಕದ ಚಿನ್ಹವನ್ನು ಬಟ್ಟೆಯ ಮೇಲೆ ಮೂಡಿಸದೆ ತನ್ನ ನೆಚ್ಚಿನ ಲ್ಯಾಪಲ್ಯಾಂಡದ ಜೋಡು ಹೂವಿನ ಚಿತ್ರವನ್ನು ತನ್ನ ಉಡುಪುಗಳ ಮೂಡಿಸಿದನು



ತಾನು ಇಷ್ಟೊಂದು ಸಿರಿವಂತ ಮತ್ತು ಪ್ರಸಿದ್ಧ ವ್ಯಕ್ತಿಯಾದರೂ ಉದ್ಯಾನದಲ್ಲಿ ಕೆಲಸ ಮಾಡುವದನ್ನು ಆತ ನಿಲ್ಲಿಸಲಿಲ್ಲ. ತನ್ನ ತೋಟದಲ್ಲಿ ಜಗತ್ತಿನಲ್ಲಿಯ ಸಾವಿರಾರು ಜಾತಿಯ ವನಸ್ಪತಿಗಳನ್ನು ನೆಟ್ಟಿ ಬೆಳೆಸಿದನು. ಅದರಲ್ಲಿ ಬಾಳೆ, ಕಾಡು ಟ್ಯುಲಿಪ, ನೀರ್ದಾವರೆ, ಕ್ಯಾಕೋ ಕಂಟಿ, ಲಾರೆಲ್ ಗಿಡ ಮುಂತಾದವುಗಳು ಇದ್ದವು. ತನ್ನ ಪ್ರೀತಿಯ ಜೋಡು ಹೂ ಕೂಡ ಅಲ್ಲಿ ಇತ್ತು. ಎಷ್ಟೋ ಔಷಧಿ ವನಸ್ಪತಿಗಳು, ತಿನ್ನಲು ಹಣ್ಣು ಕೊಡುವ ಗಿಡಗಳು ಅಲ್ಲಿದ್ದವು, ಮಂಗ, ಗಿಳಿ, ನವಿಲು ಮುಂತಾದ ಪ್ರಾಣಿ-ಪಕ್ಷಿಗಳು ಕೂಡ ಆತನ ಉದ್ಯಾನದಲ್ಲಿ ಇರತೊಡಗಿದವು. “ನಾನು ಅರಸನಂತೆ ಇದ್ದೇನೆ.” ಎಂದು ಕಾರ್ಲ ಹೇಳುತ್ತಿದ್ದ.

ಕಾರ್ಲ ತೋಟ ಬಿಟ್ಟು ಹೊರಬೀಳುತ್ತಿರಲಿಲ್ಲ.




“ಈ ಮೊದಲು ನನ್ನ ಹತ್ತಿರ ವನಸ್ಪತಿಗಳಿದ್ದವು ಆದರೆ ದುಡ್ಡಿರಲಿಲ್ಲ.
ಈಗ ದುಡ್ಡಿದ್ದರೂ ವನಸ್ಪತಿಗಳು ಇರದಿದ್ದರೆ ಅದರ
ಪ್ರಯೋಜನವೇನು?”

*ನೋಡಲಿಕ್ಕೆ ಕಾರ್ಲ ತೆಳ್ಳಗಿನ ಪ್ರಕೃತಿಯವನು, ಅಷ್ಟು ಎತ್ತರ ಇಲ್ಲ ಇಲ್ಲವೆ ಕುಳ್ಳನಲ್ಲ. ಕಂದು ಬಣ್ಣದ ಕಣ್ಣುಗಳು. ನಡೆ ರಭಸದ್ದು. ಎಲ್ಲ ಕೆಲಸಗಳನ್ನು ಸರಿಯಾಗಿ ಮಾಡುವವ. ಆಲಸ್ಯ ಆತನಿಗೆ ಸೇರದು. ಸಂವೇದನಶೀಲನು. ತಡೆ ಇಲ್ಲದೆ ಕೆಲಸ ಮಾಡುವವನು.* (ಇದೆಲ್ಲ ಆತನೇ ಬರೆದಿದ್ದು.)

ಇಷ್ಟೊಂದು ಪ್ರಸಿದ್ಧಿಗೆ ಬಂದಿದ್ದರೂ ಅವನ ಕೆಲಸ ನಿಲ್ಲಲಿಲ್ಲ. ತನ್ನ ದೀರ್ಘ ಆಯುಷ್ಯವನ್ನು ನಿಸರ್ಗದ ಅಭ್ಯಾಸದಲ್ಲಿಯೇ ಕಳೆದನು. ತರುಣ ನಿಸರ್ಗಅಭ್ಯಾಸಕರಿಗೆ ಉತ್ತೇಜನೆ ನೀಡುವದರಲ್ಲಿ ಪಳಗಿದ ಕೈ. ಎಷ್ಟೋ ಸಲ ಆತನು ಪುಕ್ಕಟೆ ಕಲಿಸುತ್ತಿದ್ದನು. ಉದ್ಯಾನಗಳನ್ನು ಬೆಳೆಸುತ್ತಿದ್ದನು. “ಒಂದು ಗಿಡ ನಶಿಸಿದರೆ ಮತ್ತೊಂದು ಗಿಡವನ್ನು ಬೇರೆ ಸ್ಥಳದಲ್ಲಿ ನೆಟ್ಟಿರಿ.” ಎಂಬುದು ಅವನ ಸಂದೇಶ. ವಯಸ್ಸಾದಂತೆ ಕಾರ್ಲನಿಗೆ ತನ್ನ ಪ್ರೀತಿಯ ಆರೈಕೆ ಮಾಡಲು ಮೆಟ್ಟಲು ಏರುವದು ಕಠಿಣವಾಗತೊಡಗಿತು. ಆದ್ದರಿಂದ ಉದ್ಯಾನದಲ್ಲಿಯೇ ತಾನು ಮಲಗುವ ಕೋಣೆಯ ವ್ಯವಸ್ಥೆ ಮಾಡಿದನು. ಕೋಣೆಯ ನಾಲ್ಕು ಗೋಡೆಗಳ ಮೇಲೆ ವನಸ್ಪತಿಗಳ ಚಿತ್ರಗಳನ್ನು ಲಗತ್ತಿಸಿದನು. ಕೈಯಿಂದ ಬರೆದ ಹೂವಿನ ಚಿತ್ರಗಳು ಅಲ್ಲಿ ಇದ್ದವು. ಆತನು 1778ರಂದು ಮೃತನಾದನು. ಅವನ ಅಂತ್ಯಯಾತ್ರೆಗೆ ಸಂಪೂರ್ಣ ಸ್ವಿಡನ್ ಶೋಕದಲ್ಲಿ ಮುಳುಗಿತು. ಅಂತ್ಯಯಾತ್ರೆಯ ದಿನ ದಾರಿಯ ಎರಡು ಬದಿಯಲ್ಲಿ ಜನರು ನಿಂತು ಈ ನಿಸರ್ಗ ಶಾಸ್ತ್ರಜ್ಞನಿಗೆ ತಮ್ಮ ಅಬಿವಾದನೆ ಸಲ್ಲಿಸಿದರು.
ಮೇ 23 ಇದು ಆತನ ಜನ್ಮ ದಿವಸ. ಈ ದಿನವನ್ನು ನಿಸರ್ಗ ದಿನವೆಂದು –ಲಿನ್ನೆಯಸ್ ದಿನವೆಂದು - ಇಡೀ ಜಗತ್ತಿನಲ್ಲಿಯ ನಿಸರ್ಗ ಪ್ರೇಮಿಗಳು ಆಚರಿಸುತ್ತಾರೆ. ವಿಜ್ಞಾನಿಗಳು ಹೊಸ ಹೊಸ ಪ್ರಾಣಿ –ವನಸ್ಪತಿಗಳನ್ನು ಶೋಧಿಸುತ್ತಾರೆ. ಇನ್ನೂವರೆಗೂ ಕಾರ್ಲನು ಹಾಕಿಕೊಟ್ಟ ನಾಮಕರಣದ ಪದ್ಧತಿಯನ್ನೇ ಎಲ್ಲರು ಅನುಸರಿಸುತ್ತಾರೆ. ಕಾರ್ಲನು ಯೋಚಿಸಿದಂತೆ ಇನ್ನೂ ಲಕ್ಷಗಟ್ಟಲೆ ಪ್ರಾಣಿ-ವನಸ್ಪತಿಗಳ ಹೆಸರಿಡುವ ಕೆಲಸ ಮುನ್ನಡೆಯಬೇಕಾಗಿದೆ.
ಕಾರ್ಲನ ಈ ಕೆಲಸಕ್ಕೆ ಕೊನೆ ಇಲ್ಲ.



ಹೆಸರಿನ ಬಗೆಗಿನ ಒಂದು ಟಿಪ್ಪಣಿಃ
ಕಾರ್ಲನ ಆಯುಷ್ಯ ಕಾರ್ಲ ಲಿನ್ಹೆ ಎಂದು ಪ್ರಾರಂಭವಾದರೂ ಪ್ರಸಿದ್ಧಿಗೆ ಬಂದ ಮುಂದಿನ ಆಯುಷ್ಯದಲ್ಲಿ ಆತನು ಕಾರುಹ್ಲಸ್ ಲಿನ್ನೆಯಸ್ ಎಂಬ ಹೆಸರಿನಿಂದ ಕರೆಯಲ್ಪಟ್ಟನು. ಆತನಿಗೆ ಸರದಾರ ಎಂಬ ಪದವಿಯನ್ನು ಆತನ ಉಚ್ಚ ಶ್ರೇಣಿಯ ದ್ಯೋತಕವೆಂದು ಫಾನ ಲಿನ್ಹೆ ಎಂಬ ಹೆಸರಿನಿಂದ ಸ್ವೀಕರಿಸಿದನು. ಆದರೆ ಪ್ರಾಣಿ-ವನಸ್ಪತಿಗಳಿಗೆ ಹೆಸರಿಟ್ಟಂತೆ ಆತನು ತನ್ನ ಹೆಸರನ್ನು ಗ್ರೀಕ್ ಲ್ಯಾಟಿನ್ ದಲ್ಲಿ ಬದಲಿಸಿ ಕಾರುಹ್ಲಸ್ ಲಿನ್ನೆಯಸ್ ಆದನು.

ವೈಜ್ಞಾನಿಕ ವರ್ಗೀಕರಣ
ಕಾರ್ಲನ ವರ್ಗೀಕರಣದ ರೀತಿಯ ಬಗ್ಗೆ ಸಾಕಷ್ಟು ವಿಚಾರ ಮಾಡಿದನು. ಕೊನೆಗೆ ಎರಡು ಶಬ್ದಗಳ ಹೆಸರನ್ನು ಅಂತಿಮ ಗೊಳಿಸಿದನು.
ವಿಜ್ಞಾನಿಗಳು ಈಗಲೂ ಅದೇ ಪದ್ಧತಿಯನ್ನು ಅನುಸರಿಸುತ್ತ ಬಂದಿದ್ದಾರೆ.
ಉದಾಹರಣಾರ್ಥ ತುಪ್ಪಳ ತ್ವಚೆಯ ದಿನ-ರಾತ್ರಿ ಅಳು ದನಿಯಲ್ಲಿ ಕೂಗುವ ಕೊಯೋಟುವಿನ (ಬಯಲು ತೋಳ) ವರ್ಗೀಕರಣ ಈ ರೀತಿ ಇದೆಃ

**Kingdom: Animalia (ಪ್ರಾಣಿ)**
**Phylum. Chordata (ಬೆನ್ನೆಲುಬಿರುವ)**
**Class: Mammalia (ಸಸ್ತನಿ)**
**Order: Carnivora (ಮಿಶ್ರ ಆಹಾರ)**
**Family: Canidae ಶ್ವಾನ ಕುಟುಂಬಕ್ಕೆ)**
**Genus: Canis (ನಾಯಿ)**
**Species: latrans (ಬೊಗಳುವಿಕೆ)**

ಕೊಯೋಟುವಿನ ವೈಜ್ಞಾನಿಕ ಹೆಸರು **Canis latrans.** ವೈಜ್ಞಾನಿಕ ಹೆಸರುಗಳನ್ನು ಯಾವಾಗಲು ಓರೆ ಲಿಪಿ ಹಾಗು ಅಡಿಗೆರೆ ಹಾಕಿ ಬರೆಯುತ್ತಾರೆ. **Genus** ನ್ನು ದೊಡ್ಡ ಅಕ್ಷರಗಳಲ್ಲಿ ಆದರೆ ಎರಡನೇ ಹೆಸರು ನಿತ್ಯದ ಅಕ್ಷರಗಳಲ್ಲಿ ಬರೆಯುತ್ತಾರೆ. ಹೆಸರಿನ ಮುಂದೆ **L** ಅಕ್ಷರ ಇದ್ದರೆ ಅದರ ನಾಮಕರಣ ಕಾರ್ಲನು ಮಾಡಿದ್ದಾನೆ ಎಂದು ತಿಳಿಯಲಾಗುತ್ತದೆ.



ಬದಲಾವಣೆಗಳು
ವಿಜ್ಞಾನ ನಿಂತ ಕೆರೆಯಲ್ಲ, ಅದು ಹರಿಯುತ್ತಿರುವ ಹಳ್ಳ. ವಿಜ್ಞಾನಿಗಳು ಲಿನ್ನಿಯನ್ ಪದ್ಧತಿಯಲ್ಲಿ ಸಾಕಷ್ಟು ಮಾರ್ಪಾಟುಗಳನ್ನು ಮಾಡಿದ್ದಾರೆ. ಬ್ಯಾಕ್ಟಿರಿಯಾ ಮತ್ತು ಫಂಗಸ್ **kingdom**ವನ್ನು **phyla** ಎಂಬ ಗುಂಪಿಗೆ ಸೇರಿಸಲಾಗಿದೆ. **Quadrupedia** ಎಂದು ಸಸ್ತನಿ ಪ್ರಾಣಿಗಳನ್ನು ಕರೆಯುವ ಬದಲು ಈಗ **Mammalia** ಎಂದು ಕರೆಯಲಾಗುತ್ತದೆ. ಕಾರ್ಲನ ನಂತರದ ಕಾಲದಲ್ಲಿ ಇನ್ನು ಎಷ್ಟೊ ಪ್ರಾಣಿ ಮತ್ತು ವನಸ್ಪತಿಗಳ ವರ್ಗಗಳನ್ನು ಹೊಸದಾಗಿ ಸೇರಿಸಲ್ಪಟ್ಟಿವೆ. ಆತನು **reptiles** ಗಳನ್ನು **amphibian** ಗುಂಪಿಗೆ ಸೇರಿಸಿದ್ದನು. ಈಗ ಅವು ಬೇರೆ ಬೇರೆ ವರ್ಗಕ್ಕೆ ಸೇರಿವೆ.
ವಿಜ್ಞಾನಿಗಳು ವರ್ಗೀಕರಣ ಮಾಡುವಾಗ ಕಾರ್ಲನಂತೆ ಕೂಲಂಕುಶವಾಗಿ ಚರ್ಚೆ ಮಾಡುತ್ತಾರೆ. ಹೂವಿರಲಿ, ಮೀನುಗಳಿರಲಿ, ಅಮೀಬಾ ಇರಲಿ, ಹಕ್ಕಿಗಳಿರಲಿ, ಅವುಗಳ ಬಾಹ್ಯ ರಚನೆ, ಅವುಗಳ ಅಂತರ ರಚನೆ ಮುಂತಾದವುಗಳ ವಿವರಗಳನ್ನು ಕಲೆ ಹಾಕುತ್ತಾರೆ, ಕಾರ್ಲನು ಮ್ಯಾಗ್ನಿಫಾಯಿಂಗ ಗ್ಲಾಸನ್ನು ಉಪಯೋಗಿಸುತ್ತಿದ್ದನು. ಈಗ ಇಲೆಕ್ಟ್ರಾನ್ ಮಾಯಕ್ರೋಸ್ಕೋಪ ಮತ್ತು ಕಾಂಪ್ಯುಟರ ಉಪಯೋಗಿಸಿ **DNA.**ದ ವಿಶ್ಲೇಷಣೆ ಮಾಡುತ್ತಾರೆ. ಎಷ್ಟೋ ಜೀವಿಗಳು ಒಂದಕ್ಕೊಂದು ಸಂಬಂಧಿಸಿರುವದಿಲ್ಲ ಎಂಬುದನ್ನು ಅವರು ಕಂಡು ಹಿಡಿದಿದ್ದಾರೆ. .ವೈಜ್ಞಾನಿಕ ವರ್ಗೀಕರಣವು ಭವಿಷ್ಯದಲ್ಲಿ ಮಾರ್ಪಾಟಾಗುತ್ತ ಹೋಗುವದು.
ಕಾರ್ಲನು ಸಾವಿರಾರು ಪ್ರಾಣಿ ಮತ್ತು ವನಸ್ಪತಿಗಳ ಮಾದರಿಗಳನ್ನು ಸಂಗ್ರಹಿಸಿದ್ದನು. ಈ ಎಲ್ಲ ಮಾದರಿಗಳನ್ನು ಲಂಡನ್ನಿನ ಲಿನ್ನೆಯನ್ ಸೋಸಾಯಟಿಯಲ್ಲಿ ಇಡಲಾಗಿದೆ. ಕಾರ್ಲನ ಉದ್ಯಾನವನ್ನು ಸ್ವಿಡನ್ನಿನಲ್ಲಿಯ ಹ್ಯಾಮರ್ಬೆ ಎಂಬ ಪಟ್ಟಣದಲ್ಲಿ ಜೋಪಾನವಾಗಿ ಇಟ್ಟಿದ್ದಾರೆ. ಗೋಡೆಯ ಮೇಲಿನ ಚಿತ್ರಗಳು ಅಳಿಸಿ ಹೋಗಿದ್ದರು ಕೂಡ ಅವನ ಮಲಗುವ ಕೋಣೆಯಲ್ಲಿ ಹೂಗಳನ್ನಿಟ್ಟು ಸಿಂಗರಿಸುತ್ತಾರೆ.
ಅಚ್ಚರಿಯ ಶೋಧದಲ್ಲಿ
ನಿಸರ್ಗದಲ್ಲಿಯ ಸೌಂದರ್ಯ ಮತ್ತು ಸಂಭ್ರಮಗಳ ಬಗ್ಗೆ ಕಾರ್ಲನಿಗೆ ಕುತೂಹಲ. ವಯಸ್ಸಾದಾಗಲೂ ರಾತ್ರಿಯ ಉಡುಪುಗಳನ್ನು ಧರಿಸಿ ಹೂ ಇಲ್ಲವೆ ಹಕ್ಕಿಗಳನ್ನು ನೋಡಲು ಉದ್ಯಾನಕ್ಕೆ ಹೋಗುತ್ತಿದ್ದನು.
“ನಿಸರ್ಗವು ನಿಮಗಾಗಿ ಕಾಯುವದಿಲ್ಲ. ಅದರ ಜತೆಗೆ ನೀವು ಹೋಗಬೇಕು.” ಎಂದು ಆತ ಯುವಕರಿಗೆ ಹೇಳುತ್ತಿದ್ದನು.
ಕಾರ್ಲನಿಗೆ ದೊಡ್ಡ ಗಾತ್ರದ ತಿಮಿಂಗಿಲ ಇರಲಿ, ಇಲ್ಲವೆ ಹೊಳೆಯುತ್ತಿರುವ ಕ್ರಿಮಿ ಇರಲಿ, ಇಲ್ಲವೆ ಚಿಕ್ಕ ಬಣ್ಣದ ಕಾಡು ಹೂವಿರಲಿ ಅವನ ಸಂಭ್ರಮ, ಕುತೂಹಲ ಮತ್ತು ಅಚ್ಚರಿಗೆ ಸೀಮೆ ಇರಲಿಲ್ಲ. “ನೀವು ಕೂಡ ಏನನ್ನು ಕಂಡು ಸಂಭ್ರಮಿತರಾಗುವಿರಿ?”



**ಕಾಲರೇಷೆ**

**1707:** ಕಾರ್ಲ ಲಿನ್ಸ್ ಮೇ 23 ರಂದು ಸ್ವಿಡನ್ನಿನ ರಾಶುಲ್ಟ ಎಂಬ ಹಳ್ಳಿಯಲ್ಲಿ ಹುಟ್ಟಿದನು.  ಎರಡು ವರುಷಗಳ ನಂತರ ಅವನ ತಂದೆ-ತಾಯಿ ಸ್ವೆನಬ್ರೋಹಲ್ಟ ಎಂಬ ಪಟ್ಟಣದಲ್ಲಿ ನೆಲೆಸಿದರು.

**1727:** ಕಾರ್ಲನು ಲುಂಡ ವಿದ್ಯಾಪೀಠದಲ್ಲಿ ವೈದ್ಯಕ ಶಾಸ್ತ್ರ ಕಲಿಯಲು ಹೋದನು.

**1729:** 22ನೇ ವಯಸ್ಸಿನಲ್ಲಿ ಕಾರ್ಲನು ಪ್ರಾಣಿ, ವನಸ್ಪತಿ ಮತ್ತು ವಸ್ತುಗಳ ವರ್ಗೀಕರಣದ ಕೆಲಸವನ್ನು ಪ್ರಾರಂಬಿಸಿದನು

**1732:** ಸಾವಿರಾರು ಮೈಲು ದೂರದಲ್ಲಿರುವ ಲ್ಯಾಪಲ್ಯಾಂಡಿನ ಸಾಮಿ ಎಂಬ ಜನಾಂಗದ ಜತೆ ತಿಂಗಳುಗಟ್ಟಲೆ ಇದ್ದು ವನಸ್ಪತಿಗಳ ಮಾದರಿಗಳನ್ನು ಸಂಗ್ರಹಿಸಿದನು.

**1735:** ಕಾರ್ಲನು  **Systema Naturae** (ನಿಸರ್ಗದ ಪದ್ಧತಿ) ಎಂಬ ತಾನು ಬರೆದ ಪುಸ್ತಕದ ಪ್ರಥಮ ಆವೃತ್ತಿಯನ್ನು ಪ್ರಕಾಶಿತಗೊಳಿಸಿದನು. ಈ ಪುಸ್ತಕದಲ್ಲಿ ಪ್ರಾಣಿ, ವನಸ್ಪತಿ ಮತ್ತು ವಸ್ತುಗಳ ವರ್ಗೀಕರಣ ಮಾಡುವ ಬಗೆಯನ್ನು ವಿವರಿಸಲಾಗಿತ್ತು.

**1739:** ಸಾರಾ ಲಿಸಾ ಮೋರಾಯಾ ಎಂಬವಳ ಜತೆ ಅವನ ವಿವಾಹವಾಯಿತು. ಅವರಿಗೆ ಏಳು ಮಕ್ಕಳು. ಅವುಗಳಲ್ಲಿ ಇಬ್ಬರು ಚಿಕ್ಕಂದಿನಲ್ಲಿಯೇ ಮೃತರಾದರು. ಕಾರ್ಲನ ಮಗ ಕೂಡ ನಿಸರ್ಗ ವಿಜ್ಞಾನಿ. ಹೆಣ್ಣು ಮಕ್ಕಳು ಮಾತ್ರ ಬಹಳ ಕಲಿತವರಲ್ಲ.

**1753:** ಕಾರ್ಲನು ಸಾವಿರಾರು ವನಸ್ಪತಿಗಳ ವರ್ಗೀಕರಣ ಮಾಡಿದ **Species Plantarum** (ವನಸ್ಪತಿಗಳ ಪ್ರಜಾತಿ), ಎಂಬ ಪುಸ್ತಕವನ್ನು ಪ್ರಕಾಶಿತಗೊಳಿಸಿದನು.ಇದು ಆಧುನಿಕ ವರ್ಗೀಕರಣ ಪದ್ಧತಿಗೆ ತಳಹದಿಯಾಯಿತು.

**1757:** ಅಡಾಲ್ಫ ಫ್ರೆಡ್ರಿಕ್ ಎಂಬ ರಾಜನು **Knight of the Order of the Polar** ಎಂಬ ಬಹುಮಾನ ಕೊಟ್ಟು ಕಾರ್ಲನನ್ನು ಆದರಿಸಿದನು.

**1778:** ಸ್ವಿಡನ್ನಿನ ಉಪ್ಸಾಲಾದ ಕ್ಯಾಥೆಡ್ರಾಲ (ಚರ್ಚ)ದಲ್ಲಿ ಅವನ ಅಂತ್ಯಸಂಸ್ಕಾರವಾಯಿತು.

**1788:** ಕಾರ್ಲನ ಸಂಗ್ರಹವನ್ನು ನಿಸರ್ಗದ ಇತಿಹಾಸದ ಅಭ್ಯಾಸ ಮಾಡುವ ಲಿನ್ನೆಯನ್ ಸೋಸಾಯಟಿಗೆ ಹಸ್ತಾಂತರ ಮಾಡಲಾಯಿತು.



**ಸಮಾಪ್ತ**

